# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 660
2. ಸದಸ್ಯರ ಹೆಸರು : ಡಾ: ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 24.09.2020
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

<table>
<tr><th>ಕ್ರ.ಸಂ.</th><th>ಪ್ರಶ್ನೆಗಳು</th><th>ಉತ್ತರಗಳು</th></tr>
<tr><td>ಅ)</td><td>ಎತ್ತಿನಹೊಳೆ ಯೋಜನೆ ಪ್ರಾರಂಭವಾದಾಗಿನಿಂದ ಈವರೆಗೆ ಎಷ್ಟು ಕೆರೆಗಳಿಗೆ ನೀರನ್ನು ತುಂಬಿಸಲಾಗಿದೆ;</td><td rowspan="2">ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಅನುಮೋದಿತ ಯೋಜನಾ ವರದಿಯಂತೆ ನೀರನ್ನು ತುಂಬಿಸಲು ಉದ್ದೇಶಿಸಿರುವ ಜಿಲ್ಲಾವಾರು ಕೆರೆಗಳ ವಿವರ ಈ ಕೆಳಗಿನಂತಿವೆ:<br><br>
<table>
<tr><th>ಕ್ರ ಸಂ</th><th>ಜಿಲ್ಲೆಯ ಹೆಸರು</th><th>ಕೆರೆಗಳ ಸಂಖ್ಯೆ</th></tr>
<tr><td>1</td><td>ಹಾಸನ</td><td>34</td></tr>
<tr><td>2</td><td>ತುಮಕೂರು</td><td>113</td></tr>
<tr><td>3</td><td>ಕೋಲಾರ</td><td>138</td></tr>
<tr><td>4</td><td>ಚಿಕ್ಕಬಳ್ಳಾಪುರ</td><td>196</td></tr>
<tr><td>5</td><td>ಬೆಂಗಳೂರು ಗ್ರಾಮಾಂತರ</td><td>46</td></tr>
<tr><td></td><td>ಒಟ್ಟು</td><td>527</td></tr>
</table>
<br>ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಪ್ರಥಮ ಹಂತದ ಏತ ಕಾಮಗಾರಿಗಳನ್ನು 2013-14ರಿಂದ ಅನುಷ್ಠಾನಗೊಳಿಸಲಾಗುತ್ತಿದ್ದು, ಕಾಮಗಾರಿಗಳು ಬಹುತೇಕ ಪೂರ್ಣಗೊಳ್ಳುವ ಹಂತದಲ್ಲಿವೆ. ಎರಡನೇ ಹಂತದ ಗುರುತ್ವ ಕಾಲುವೆಯ ಕಾಮಗಾರಿಗಳನ್ನು 2016-17 ಸಾಲಿನಿಂದ ಕೈಗೆತ್ತಿಕೊಳ್ಳಲಾಗಿದ್ದು, ಕಾಮಗಾರಿಗಳು ಇನ್ನೂ ವಿವಿದ ಹಂತದ ಪ್ರಗತಿಯಲ್ಲಿರುವುದರಿಂದ ಯಾವುದೇ ಕೆರೆಗಳನ್ನು ಇಲ್ಲಿಯವರೆಗೆ ತುಂಬಿಸಿರುವುದಿಲ್ಲ.</td></tr>
<tr><td>ಆ)</td><td>ಬಾಕಿ ಕೆರೆಗಳನ್ನು ಯಾವ ಕಾಲಮಿತಿಯೊಳಗೆ ತುಂಬಿಸಲಾಗುವುದು; (ಜಿಲ್ಲಾವಾರು ಪ್ರತ್ಯೇಕವಾಗಿ ಮಾಹಿತಿ ನೀಡುವುದು)</td></tr>
<tr><td>ಇ)</td><td>ಎತ್ತಿನಹೊಳೆ ಯೋಜನೆಯ ಪ್ರಗತಿಯು ಕುಂಟುತ್ತಾ ಸಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ. ಇದಕ್ಕೆ ಕಾರಣಗಳೇನು;</td><td>ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯನ್ನು ಎರಡು ಹಂತಗಳಲ್ಲಿ ಕೈಗೆತ್ತಿಕೊಳ್ಳಲಾಗಿದ್ದು, ಮೊದಲನೇ ಹಂತದ ಏತ ಕಾಮಗಾರಿಗಳು ಹಾಗೂ ವಿದ್ಯುತ್ ಪೂರೈಕೆ ಕಾಮಗಾರಿಗಳು ಬಹುತೇಕ ಪೂರ್ಣಗೊಂಡಿರುತ್ತವೆ. ಎರಡನೇ ಹಂತದಲ್ಲಿ 260 ಕಿ.ಮೀ ಉದ್ದದ ಗುರುತ್ವ ಕಾಲುವೆಯ ಪೂರ್ಣ ಉದ್ದಕ್ಕೆ ಕಾಮಗಾರಿಗಳನ್ನು ಪ್ರಾರಂಭಿಸಲಾಗಿದ್ದು, ವಿವಿಧ ಹಂತದಲ್ಲಿ ಪ್ರಗತಿಯಲ್ಲಿರುತ್ತದೆ.<br><br>ಯೋಜನೆಯ ಪ್ರಗತಿ ಕುಂಠಿತ ಗೊಂಡಿರುವುದಕ್ಕೆ ಕಾರಣಗಳು:<br>1. ಈ ಯೋಜನೆಯು ಪ್ರಾರಂಭಗೊಂಡ ತಕ್ಷಣ 2013 ನೇ ಹೊಸ ಭೂ-ಸ್ವಾಧೀನಕಾಯ್ದೆ ಜಾರಿಯಾಗಿದ್ದು ಅದರ ಪ್ರಕಾರ ಭೂ-ಸ್ವಾಧೀನಪ್ರಕ್ರಿಯೆಗಳನ್ನು ಪುನ: ಕೈಗೊಂಡಿರುವುದರಿಂದ.<br>2. ಭೈರಗೊಂಡ್ಲು ಜಲಾಶಯದ ನಿರ್ಮಾಣ ಕಾಮಗಾರಿಯನ್ನು ಪ್ರಾರಂಭಿಸಲು ಪೂರ್ವ ಸಿದ್ದತಾ ಕೆಲಸ ಕಾರ್ಯಗಳನ್ನು ಕೈಗೊಂಡಾಗ ಕೊರಟಗೆರೆ ತಾಲ್ಲೂಕಿನ ರೈತರು ಏಕರೂಪದರ ನೀಡಲು ಒತ್ತಾಯಿಸಿ ಅಡ್ಡಿಪಡಿಸಿರುವುದರಿಂದ ಕಾಮಗಾರಿಯನ್ನು</td></tr>
</table>

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| | | ಪ್ರಾರಂಭಿಸಲು ಸಾಧ್ಯವಾಗಿರುವುದಿಲ್ಲ. ಏಕರೂಪದ ಭೂಪರಿಹಾರದ ಕುರಿತು ಸರ್ಕಾರದ ಮಟ್ಟದಲ್ಲಿ ಪರಿಶೀಲನೆಯಲ್ಲಿರುತ್ತದೆ. |
| ಈ) | ಈ ಯೋಜನೆಗೆ ವೇಗವನ್ನು ನೀಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | 2019–20ನೇ ಸಾಲಿನ ಆಯವ್ಯಯದಲ್ಲಿ ರೂ.15.00 ಕೋಟಿ ಮೊತ್ತದಲ್ಲಿ ಅರಸೀಕೆರೆ ತಾಲ್ಲೂಕಿನ ಕೆರೆಗಳು, ರೂ.50.00 ಕೋಟಿ ಮೊತ್ತದಲ್ಲಿ ತುಮಕೂರು ಜಿಲ್ಲೆಯ ಕೆರೆಗಳು, ರೂ.75.00 ಕೋಟಿ ಮೊತ್ತದಲ್ಲಿ ಕೋಲಾರ ಜಿಲ್ಲೆಯ ಕೆರೆಗಳು, ರೂ.100.00 ಕೋಟಿ ಮೊತ್ತದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ಕೆರೆಗಳು ಹಾಗೂ ರೂ.50.00 ಕೋಟಿ ಮೊತ್ತದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೆರೆಗಳ ಸಮಗ್ರ ಅಭಿವೃದ್ಧಿ ಕೈಗೊಳ್ಳಲು ಘೋಷಿಸಲಾಗಿದೆ. ಅಲ್ಲದೆ, ರೂ.20.00 ಕೋಟಿ ಮೊತ್ತದಲ್ಲಿ ಬಾಗೇಪಲ್ಲಿ ತಾಲ್ಲೂಕು ಪಾತಪಾಳ್ಯ ಹೋಬಳಿಯ ಬಳಿ ಘಂಟಲಮಲ್ಲಮ್ಮನ ಕಣಿವೆಗೆ ಅಡ್ಡಲಾಗಿ ಹಳ್ಳಕ್ಕೆ ಬ್ಯಾರೇಜ್ ನಿರ್ಮಾಣ ಮಾಡುವ ಕಾಮಗಾರಿಯನ್ನು ಕೈಗೊಳ್ಳಲು ಘೋಷಿಸಲಾಗಿರುತ್ತದೆ.<br>1. ಅನುಮೋದಿತ ಯೋಜನಾ ವರದಿಯಲ್ಲಿನ 527 ಕೆರೆಗಳ ಪೈಕಿ, ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳ 81 ಕೆರೆಗಳಿಗೆ ಹೆಚ್.ಎನ್.ವ್ಯಾಲಿ ಮತ್ತು ಕೆ.ಸಿ ವ್ಯಾಲಿ ಯೋಜನೆಗಳಡಿ ನೀರನ್ನು ಪೂರೈಸಲಾಗುತ್ತಿರುವುದರಿಂದ ಈ 81 ಕೆರೆಗಳನ್ನು ಹೊರತು ಪಡಿಸಿ ಉಳಿದ 446 ಕೆರೆಗಳು ಮತ್ತು ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಲ್ಲಿ ತಾಲ್ಲೂಕಿನ ಘಂಟಲಮಲ್ಲಮ್ಮ ಕಣಿವೆಯ ಸಮಗ್ರ ಅಭಿವೃದ್ಧಿ ಕೆಲಸಗಳ ಸರ್ವೆ, ಸಮೀಕ್ಷೆ ಕಾರ್ಯ ಮತ್ತು ಯೋಜನಾ ವರದಿ ತಯಾರಿಕೆಗಾಗಿ ಸಮಾಲೋಚಕರನ್ನು ನೇಮಿಸಲಾಗಿದೆ.<br>2. ಭೈರಗೊಂಡ್ಲು ಜಲಾಶಯದಿಂದ ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ನೀರೊದಗಿಸುವ ಕುಂದಾಣ ಲಿಫ್ಟ್ ಕಾಮಗಾರಿ, ಕೋಲಾರ ಮತ್ತು ಚಿಕ್ಕಬಳ್ಳಾಪುರ ಫೀಡರ್ ಕಾಲುವೆ ಕಾಮಗಾರಿಗಳ ಸರ್ವೆ, ಸಮೀಕ್ಷೆ ಕಾರ್ಯ ಮತ್ತು ಯೋಜನಾ ವರದಿ ತಯಾರಿಕೆಗಾಗಿ ಸಮಾಲೋಚಕರನ್ನು ನೇಮಿಸಲಾಗಿದ್ದು, ಅಂದಾಜುಗಳನ್ನು ತಯಾರಿಸಲಾಗುತ್ತಿದೆ.<br>ಸದರಿ ಯೋಜನೆಯ ಕಾಮಗಾರಿಗಳು ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿದ್ದು, ಭೈರಗೊಂಡ್ಲು ಜಲಾಶಯ ನಿರ್ಮಾಣದಲ್ಲಿ ಎದುರಾದ ಭೂಸ್ವಾಧೀನ ಸಮಸ್ಯೆ ಸಕಾಲದಲ್ಲಿ ಇತ್ಯರ್ಥಗೊಂಡಲ್ಲಿ, ಭೈರಗೊಂಡ್ಲು ಜಲಾಶಯ ನಿರ್ಮಾಣ ಕಾಮಗಾರಿ, ಭೈರಗೊಂಡ್ಲು ಜಲಾಶಯದಿಂದ ಕೋಲಾರ ಮತ್ತು ಚಿಕ್ಕಬಳ್ಳಾಪುರ ತಾಲ್ಲೂಕುಗಳಿಗೆ ನೀರೊದಗಿಸುವ ಕುಂದಾಣ ಲಿಫ್ಟ್ ಕಾಮಗಾರಿ, ಕೋಲಾರ ಮತ್ತು ಚಿಕ್ಕಬಳ್ಳಾಪುರ ಫೀಡರ್ ಕಾಲುವೆ ಕಾಮಗಾರಿಗಳನ್ನು ಆಧ್ಯತೆ ಮೇರೆಗೆ ಕೈಗೆತ್ತಿಕೊಂಡು 2023–24 ಸಾಲಿನಲ್ಲಿ ಪೂರ್ಣಗೊಳಿಸಲು ಯೋಜಿಸಲಾಗಿದೆ. |

**ಸಂಖ್ಯೆ: ಜಸಂಇ 91 ಡಬ್ಲ್ಯೂಎಲ್ಎ 2020**

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು
(ಬೃಹತ್ ಮತ್ತು ಮಧ್ಯಮ ನೀರಾವರಿ)